# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಎನ್.ಎಸ್. ಬೋಸ್ ರಾಜು (ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 269 |
| ಉತ್ತರಿಸಬೇಕಾದ ದಿನಾಂಕ | : | 04/03/2020 |
| ಉತ್ತರಿಸಬೇಕಾದ ಸಚಿವರು | : | ಶ್ರೀ ವಿ. ಸೋಮಣ್ಣ, ವಸತಿ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಜಿಲ್ಲೆಗೆ 2019-20 ನೇ ಸಾಲಿನಲ್ಲಿ ವಸತಿ ಇಲಾಖೆಯ ವಿವಿಧ ವಸತಿ ಯೋಜನೆಗಳ ಮುಖಾಂತರ ಮಂಜೂರಾಗಿರುವ ಮನೆಗಳ ಸಂಖ್ಯೆ ಎಷ್ಟು; ನಿರ್ಮಾಣ ಮಾಡಿರುವ ಮನೆಗಳು ಎಷ್ಟು; ಇಲ್ಲಿಯವರೆಗೂ ಮಂಜೂರಾಗಿರುವ ಮನೆಗಳನ್ನು ಪೂರ್ಣಗೊಳಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | 2019-20ನೇ ಸಾಲಿನಲ್ಲಿ ಸರ್ಕಾರದ ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) ವಸತಿ ಯೋಜನೆಯಡಿ ಮಂಜೂರು ಮಾಡಲಾಗಿದ್ದ 2133 ಮನೆಗಳ ಪೈಕಿ 135 ಮನೆಗಳು ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿದ್ದು ಉಳಿದ 1998 ಮನೆಗಳನ್ನು ಪ್ರಾರಂಭಿಸಬೇಕಾಗಿದೆ.<br><br>ರಾಜ್ಯ ಸರ್ಕಾರದ ವಸತಿ ಯೋಜನೆಗಳಡಿ 2019-20 ನೇ ಸಾಲಿಗೆ ಮನೆಗಳನ್ನು ಮಂಜೂರು ಮಾಡಿರುವುದಿಲ್ಲ.<br><br>➢ ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) ಅಡಿಯಲ್ಲಿ ಪ್ರತಿ ಗ್ರಾಮ ಪಂಚಾಯಿತಿಗೆ ಒಬ್ಬ ಆವಾಸ್ ಮಿತ್ರನನ್ನು ನೇಮಕ ಮಾಡಲಾಗಿದ್ದು, ಸದರಿ ಅವಾಸ್ ಮಿತ್ರನು ಮನೆಗಳನ್ನು ನಿಗದಿತ ಅವಧಿಯೊಳಗೆ ಪೂರ್ಣಗೊಳಿಸುವಂತೆ ಫಲಾನುಭವಿಗಳಿಗೆ ಉತ್ತೇಜನವನ್ನು ನೀಡಿ ಮನೆಗಳನ್ನು ಶೀಘ್ರವಾಗಿ ಪೂರ್ಣಗೊಳಿಸುವಂತೆ ನೋಡಿಕೊಳ್ಳುತ್ತಾರೆ.<br>➢ ಫಲಾನುಭವಿಗಳನ್ನು ನಿಗದಿಪಡಿಸಲಾದ ಅವಧಿಯೊಳಗೆ ಆಯ್ಕೆ ಮಾಡುವಂತೆ ಸಂಬಂಧಪಟ್ಟ ಅಧಿಕಾರಿಗಳಿಗೆ ನಿಗಮದಿಂದ ನಿರ್ದೇಶನ ನೀಡಲಾಗುತ್ತದೆ.<br>➢ ಅನುಮೋದನೆಗೊಂಡ 90 ದಿನಗಳೊಳಗಾಗಿ ಮನೆಗಳನ್ನು ಪ್ರಾರಂಭಿಸುವಂತೆ ಗ್ರಾಮ ಪಂಚಾಯಿತಿ ಮತ್ತು ನಗರ ಸ್ಥಳೀಯ ಸಂಸ್ಥೆಗಳಿಂದ ತಿಳುವಳಿಕೆ ನೀಡಲಾಗುತ್ತಿದೆ.<br>➢ ಮನೆಯ ಪ್ರಗತಿಯ ಹಂತ ಪೂರ್ಣಗೊಂಡ ಕೂಡಲೇ ಜಿಪಿಎಸ್ ಮಾಡುವಂತೆ ಗ್ರಾಮ ಪಂಚಾಯಿತಿ ಮತ್ತು ನಗರ ಸ್ಥಳೀಯ ಸಂಸ್ಥೆಗಳಿಗೆ ಸೂಚಿಸಲಾಗುತ್ತಿದೆ.<br>➢ ಮನೆಗಳ ನಿರ್ಮಾಣ ಪ್ರಗತಿಯನ್ನು ಸಾಧಿಸುವ ಬಗ್ಗೆ ನಿಗಮದಿಂದ ಪ್ರತಿ 15 ದಿನಕ್ಕೊಮ್ಮೆ ಜಿಲ್ಲಾಡಳಿತದೊಂದಿಗೆ ವಿಡಿಯೋ ಸಂವಾದವನ್ನು ನಡೆಸಲಾಗುತ್ತಿದೆ.<br>➢ ಅದರಂತೆಯೇ ಜಿಲ್ಲಾಡಳಿತ ಮತ್ತು ತಾಲ್ಲೂಕು / ನಗರ ಮಟ್ಟದಲ್ಲಿಯೂ ಮನೆಗಳ ಪ್ರಗತಿಯನ್ನು ಪರಿಶೀಲಿಸಿ ಮನೆಗಳನ್ನು ನಿಗದಿತ ಅವಧಿಯೊಳಗೆ ಪೂರ್ಣಗೊಳಿಸಲು ಕ್ರಮ ಕೈಗೊಳ್ಳುವಂತೆ ಸಂಬಂಧಪಟ್ಟ ಅಧಿಕಾರಿಗಳಿಗೆ ಸೂಚಿಸಲಾಗುತ್ತಿದೆ. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ರಾಯಚೂರು ನಗರದಲ್ಲಿರುವ ವಿವಿಧ ಕೊಳಚೆ ಪ್ರದೇಶಗಳಲ್ಲಿ ಮನೆಗಳನ್ನು ನಿರ್ಮಾಣ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ನಗರದ 5 ಕೊಳಚೆ ಪ್ರದೇಶಗಳಲ್ಲಿ ಪ್ರಧಾನ ಮಂತ್ರಿ ಆವಾಸ್ ಯೋಜನೆ 2016–17 ನೇ ಸಾಲಿನ ಹಂತ–2 ರಲ್ಲಿ 1050 ಮನೆಗಳು ಮಂಜೂರಾಗಿದ್ದು, 751 ಮನೆಗಳ ನಿರ್ಮಾಣ ಪೂರ್ಣಗೊಂಡಿದ್ದು, 262 ಮನೆಗಳ ನಿರ್ಮಾಣ ಕಾಮಗಾರಿಗಳು ಪ್ರಗತಿಯಲಿದ್ದು, ಪೂರ್ಣಗೊಳ್ಳುವ ಹಂತದಲ್ಲಿದೆ. ಉಳಿದ 37 ಮನೆಗಳನ್ನು ಪ್ರಾರಂಭಿಸಬೇಕಿದೆ.<br><br>ರಾಯಚೂರು ನಗರದ 6 ಕೊಳಚೆ ಪ್ರದೇಶಗಳಲ್ಲಿ ಪ್ರಧಾನ ಮಂತ್ರಿ ಆವಾಸ್ ಯೋಜನೆ 2017–18 ನೇ ಸಾಲಿನ ಹಂತ–3 ರಲ್ಲಿ 500 ಮನೆಗಳು ಮಂಜೂರಾಗಿದ್ದು, ಈ ಪೈಕಿ 300 ಮನೆಗಳ ನಿರ್ಮಾಣ ಕಾಮಗಾರಿ ಪ್ರಗತಿಯಲ್ಲಿದ್ದು, ಉಳಿದ ಮನೆಗಳನ್ನು ಅರ್ಹ ಫಲಾನುಭವಿಗಳಿಂದ ವಂತಿಕೆಯನ್ನು ಪಡೆದು ಪ್ರಾರಂಭಿಸಬೇಕಾಗಿದೆ.<br><br>ರಾಯಚೂರು ನಗರದಲ್ಲಿ ಇರುವ ಕೊಳಚೆ ಪ್ರದೇಶದ ನಿವಾಸಿಗಳಿಗೆ ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಯಡಿ ಮನೆಗಳನ್ನು ನಿರ್ಮಿಸಿಕೊಡಲು ಯೋಜನಾ ವರದಿಗಳನ್ನು ತಯಾರಿಸಿ, ಕೇಂದ್ರ ಹಾಗೂ ರಾಜ್ಯ ಸರ್ಕಾರದ ಗುರಿ–ಅನುದಾನದ ಲಭ್ಯತೆಗೆ ಅನುಗಣವಾಗಿ ಹಂತ ಹಂತವಾಗಿ ಮನೆಗಳ ನಿರ್ಮಾಣ ಮಾಡಲು ಕ್ರಮ ವಹಿಸಲಾಗುತ್ತಿದೆ. |
| ಇ) | 2019–20 ನೇ ಸಾಲಿನಲ್ಲಿ ರಾಯಚೂರು ಜಿಲ್ಲೆಯ ಕೊಳಚೆ ಪ್ರದೇಶಗಳಿಗೆ ಮಂಜೂರು ಆಗಿರುವ ಮನೆಗಳು ಎಷ್ಟು? | 2019–20ನೇ ಸಾಲಿನಲ್ಲಿ ಮಂಜೂರು ಮಾಡಿಲ್ಲ. |

ವಇ 25 ಹೆಚ್‌ಎಎಂ 2020

(ವಿ. ಸೋಮಣ್ಣ)
ವಸತಿ ಸಚಿವರು.